ನಿಂತರು. ಟಿಪ್ಪೂಸುಲ್ತಾನರನ್ನು ಶಪಿಸುತ್ತಾ ಪಲಾಯನ ಮಾಡುತ್ತಿರುವ ಸೈನಿಕರನ್ನು ತಡದು ನಿಲ್ಲಿಸಿ ಅವರಿಗೆಲ್ಲಾ ಚಿನ್ನದ ಮೊಹರಾಗಳನ್ನು ಭೂರಿದಕ್ಷಿಣೆ ಕೊಡುತ್ತಾ ಹಿಂದಿರುಗಿಸುತ್ತಿದ್ದರು. ಕೆಲವರು ಸೈನಿಕರು ಹಿಂದಿರುಗಿದರು ಮತ್ತೆ ಕೆಲವರು ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ಬೇರೆ ಬಾಗಿಲಿನಿಂದ ಊರುಬಿಟ್ಟು ಹೊರಟುಹೋಗುತ್ತಿದ್ದರು. ಇಬ್ಬರು ರಾಣಿಯರೂ ನಿರಾಶಾಹೃದಯದಿಂದ ಆ ಸೈನಿಕರನ್ನು ತಡೆಗಟ್ಟುತ್ತಲೇ ಇದ್ದರು.

ಸ್ವಯಂ ಸುಲ್ತಾನನು, ಓಡಿಹೋಗುತ್ತಿರುವ ಸೈನಿಕರನ್ನು ತಡೆ ಗಟ್ಟಲು ಎಷ್ಟೋ ಪ್ರಯತ್ನಪಟ್ಟನು.

ಅಷ್ಟರಲ್ಲಿ, ಇಂಗ್ಲಿಷರ ದಂಡು ಶ್ರೀರಂಗಪಟ್ಟಣದಮೇಲೆ ಹಲ್ಲಾ ಹತ್ತುತ್ತಿದೆಯೆಂಬ ಸಮಾಚಾರವು ಸುಲ್ತಾನರ ಕಿವಿಗೆ ಬಿತ್ತು, ಸುಲ್ತಾ ನನು ಅರಮನೆಯನ್ನು ಪ್ರವೇಶಿಸಿ ಯುದ್ಧದ ದಿರಸನ್ನು ತೊಟ್ಟು ಬ್ರಾಹ್ಮ ಣರಿಗೂ ಫಕೀರರಿಗೂ ಹೇರಳವಾದ ದಾನದಕ್ಷಿಣೆಗಳನ್ನು ಕೊಟ್ಟು ತನ್ನ ಸೈನ್ಯಮೊಡಗೂಡಿ ಯುದ್ಧಕ್ಕೆ ಹೊರಟನು. ಇಂಗ್ಲಿಷರದಂಡು, ಕೋಟೆಯ ಮೇಲೇರಿ ಬರುತ್ತಿತ್ತು, ಸುಲ್ತಾನನು ವೀರಾವೇಶದಿಂದ ಒಂದೊಂದು ಏಟಿಗೆ ಹತ್ತುಹತ್ತು ಸೈನಿಕರನ್ನು ಸಂಹರಿಸುತ್ತಾ ಇಂಗ್ಲಿಷ್‌ದಂಡಿನಮೇಲೆ ಆಕ್ರಮಣಮಾಡುತ್ತಿದ್ದನು. ಯುದ್ಧವು ಬಹಳ ಬಿರುಸಿನಿಂದ ಸಾಗಿತ್ತು.

ಇತ್ತ ಶ್ರೀರಂಗಪಟ್ಟಣದಿಂದ ಅನೇಕರು ಸಂಸಾರಸಮೇತ ಪಟ್ಟಣ ವನ್ನು ಬಿಟ್ಟು ಹೊರಡುತ್ತಿದ್ದರು. ಇದೇ ಸಮಯದಲ್ಲಿ ವರ್ತಕನೊಬ್ಬನು ...ಡು ಒಂಟೆಗಳಮೇಲೆ ಸಾಮಾನು ಹೇರಿಕೊಂಡು, ಅವಕುಂಠನವತಿ ...ಬ್ಬಳನ್ನು ಜೊತೆಯಲ್ಲಿ ಕರದುಕೊಂಡು, ಲಗುಬಗೆಯಿಂದ ಪಟ್ಟಣ ...ನ್ನು ಬಿಟ್ಟು ಹೊರಡುತ್ತಿದ್ದನು. ದಾರಿಯಲ್ಲಿ ಮಂಗಳೂರು ಇಮಾ ಮನು ಸೈನಿಕನ ಉಡುಪನ್ನು ಧರಿಸಿ ಕುದುರೆಯಮೇಲೆ ಬರುತ್ತಿದ್ದನು. ಏನೋ ಸಂದೇಹದಿಂದ ಆ ವರ್ತಕನನ್ನು ಕುರಿತು ಸೇಟರೇ, ಎಲ್ಲಿಗೆ

ಪಯಣ, ಒಂಟಿಗಳಮೇಲೆ ಇರುವುದೇನು? ಈ ಅವಕುಂಠನವತಿಯಾವ ಬೀಬಿ ಯಾರು? ನಿಮ್ಮಲ್ಲಿ ರಹದಾರಿ ಇದೆಯೊ? ಎಂದು ಕೇಳಿದನು.

ವರ್ತಕನು ತಬ್ಬಿಬ್ಬಾಗಿ ಆ ಯೋಧನ ಕಡೆ ತಿರುಗಿ ನೋಡಿದನು. ಅವಕುಂಠನವತಿಯು ಹತ್ತು ಚಿನ್ನದ ಮೊಹರುಗಳನ್ನು ತೆಗೆದು ಸೈನಿಕನ ಕೈಗೆ ಕೊಡಲು ಹೋದಳು. ಸೈನಿಕನಿಗೆ ಸಂದೇಹವುಂಟಾಯಿತು, ಅವನು ಒರೆಯಿಂದ ಕತ್ತಿಯನ್ನು ಹಿಡಿದು ಒಂಟೆಯ ಕಡೆ ಬೀಸಿದನು. ಅವಕುಂಠನವತಿಯು ಆ ಪೆಟ್ಟು ವರ್ತಕನಿಗೆ ತಗಲಿತೆಂದು ಭಾವಿಸಿ ಕಿರಿಚಿಕೊಳ್ಳುತ್ತಾ ಮುಸುಕನ್ನು ತೆಗೆದಳು.

ಇಮಾಮನು ಅವಳ ಮುಖವನ್ನು ನೋಡಿ ಓಹೋ! ಹುಚ್ಚಿ! ಸಾವಿತಿ! ಎಲ್ಲಿಗೆ ಪಯಣ, ಈಜೋಡಿ ಯಾರು? ಮಿರ್‌ಸಾಧಕನು ಎಲ್ಲಿ ಹೋದನು ಎಂದು ಹೇಳುತ್ತಾ ಕುದುರೆಯಿಂದ ಕೆಳಗಿಳಿದು ಅವಳ ಕೈಯನ್ನು ಭದ್ರವಾಗಿ ಹಿಡಿದುಕೊಂಡನು. ಒಂಟೆಯಮೇಲಿದ್ದ ಗಂಟನ್ನು ಹಿಡಿದು ಎಳದನು. ಆ ಥೈಲಿಯು ಕೆಳಗೆ ಬಿದ್ದು ಚಿನ್ನದ ನಾಣ್ಯಗಳು ನೆಲದಮೇಲೆ ಚೆಲ್ಲಿದವು. ಅದನ್ನು ನೋಡಿ ಇಮಾಮನಿಗೆ ಆಶ್ಚರ್ಯ ವಾಯಿತು. ಅಷ್ಟರಲ್ಲಿ ಆ ವರ್ತಕನು ಸಾವಿತ್ರಿಯನ್ನು ಬಿಡಿಸಿಕೊಳ್ಳಲು ಇಮಾಮನಮೇಲೆ ಆಕ್ರಮಣಮಾಡಲು ಹೊರಟನು. ಇಮಾಮನು ಸಮೀಪದಲ್ಲಿ ಆ ವರ್ತಕನ ಮುಖವನ್ನು ನೋಡಿದನು. ಗುರುತು ಹಿಡಿದು ಪಕಪಕನೆ ನಕ್ಕನು.

ಏನು! ಸುಲ್ತಾನರ ದರಬಾರಿನ ಸರದಾರರು, ಕಳ್ಳರಂತೆ ಓಡುತ್ತಿರುವಿದೇನು, ಮಿರ್‌ಸಾದಕ್ ನಿನ್ನಂಥಾ ದ್ರೋಹಿಯು ಈ ಭೂಮಂಡಲದಲ್ಲಿ ಎಲ್ಲಿಯೂ ಇಲ್ಲ. ನಿನಗೆ ಶಿಕ್ಷೆಯಾಗದೆ ಇದ್ದರೆ ದೇವರು ಮೆಚ್ಚುವುದಿಲ್ಲ, ಎಂದುಹೇಳಿ ಕತ್ತಿಯನ್ನು ಬೀಸಿದನು, ಮಿರ್‌ಸಾಧಕನ ತಲೆಯು ಭೂಮಿಯಮೇಲೆ ಬಿತ್ತು.

ಹುಚ್ಚಿ ಸಾವಿತ್ರಿಯು ಇಮಾಂ! ನೀನು ನನ್ನ ಪತಿಯನ್ನು ಅನ್ಯಾಯವಾಗಿ ಕೊಂದಿರುವೆ. ದೌಲತ್‌ರಾಣಿಯವರಲ್ಲಿ ಹೇಳಿ ನಿನಗೆ

ತಕ್ಕ ಶಿಕ್ಷೆಮಾಡಿಸುತ್ತೇನೆ ಎಂದುಹೇಳಿ ಇಮಾಮನನ್ನು ನಾನಾವಿಧವಾಗಿ ಬೈಯುತ್ತಾ ಶಪಿಸುತ್ತಾ ಶ್ರೀರಂಗಪಟ್ಟಣದ ಕೋಟೆಯೊಳಕ್ಕೆ ಹಿಂದಿರುಗಿ ಹೋದಳು.

ಇಮಾಮನು ಕುದುರೆಯಮೇಲೆ ಕುಳಿತು ಕೋಟೆಯೊಳಗೆ ಪ್ರವೇಶಮಾಡಿದನು. ಮಧ್ಯಾಹ್ನದ ಸಮಯವಾಗಿತ್ತು. ಫಿರಂಗಿ ಗುಂಡುಗಳ ಶಬ್ದವು ಕೇಳಿಬರುತ್ತಿತ್ತು. ಇಂಗ್ಲಿಷ್‌ದಂಡು ಕೋಟೆಯನ್ನು ಒಡೆದು ಶ್ರೀರಂಗಪಟ್ಟಣವನ್ನು ಪ್ರವೇಶಮಾಡಿತು. ಸುಲ್ತಾನನು ಹೆಜ್ಜೆಹೆಜ್ಜೆಗೂ ಪರಾಕ್ರಮದಿಂದ ಯುದ್ಧಮಾಡಿದನು, ಕೋಟೆಯ ಸಮೀಪದಲ್ಲಿ ಸುಲ್ತಾನನು ಗುಂಡಿನೇಟು ತಗಲಿ ಕೆಳಗೆ ಬಿದ್ದನು. ಯುದ್ಧವು ನಡೆಯುತ್ತಲೇ ಇತ್ತು.

ದೌಲತ್ತಳು ಕೋಟೆಯ ಬತೇರಿಯ ಮೇಲೆ ಇಂಗ್ಲಿಷರ ಧ್ವಜವನ್ನು ಕಂಡಳು. ಅಲ್ಲಿಂದ ಕುದುರೆಯನ್ನು ಹಿಂದಿರುಗಿಸಿ ಇಯಜ್‌ಖಾನನ ಸಮಾಧಿಯಿದ್ದೆಡೆಗೆ ಹೋದಳು, ಸಮಾಧಿಯಮುಂದೆ ಕುಳಿತು ಬಿಕ್ಕಿಬಿಕ್ಕಿ ಅಳತೊಡಗಿದಳು. ಸಂಧ್ಯಾಕಾಲವಾಗುತ್ತ ಬಂದಿತು. ದೌಲತ್ತಳು ಆ ದುಃಖದ ವೇಗವನ್ನು ತಡೆಯಲಾರದೆ ಎದ್ದು ಸಮಾಧಿಗೆ ವಂದಿಸಿದಳು ಆ ಸಮಾಧಿಯ ಪಕ್ಕದಲ್ಲಿದ್ದ ಮಹಾವೃಕ್ಷವನ್ನು ತಲೆಯೆತ್ತಿ ನೋಡಿದಳು. ದೌಲತ್ತಳ ಮನಸ್ಸಿನಮೇಲೆ ತನ್ನ ಬಾಲ್ಯದಿಂದ ಅಂದಿನವರಿಗಿನ ಘಟನೆಗಳೆಲ್ಲಾ ಒಂದಾಗಿ ಮನಸ್ಸಿನಮೇಲೆ ಬಂದವು.

ದೌಲತ್ತಳು, ಜಗದೀಶ, ಅಂದಿನ ನನ್ನ ಆಶಾಕಲ್ಪನೆಗಳೆಲ್ಲಾ ಏನಾದವು, ಸುಲ್ತಾನೀ ಚಕ್ರಾಧಿಪತ್ಯದ ಕಲ್ಪನೆಯು ಏನಾಯಿತು, ನನ್ನ ಪ್ರಣಯಕ್ಕಾಗಿ ಸರ್ವಸ್ವವನ್ನು ತ್ಯಾಗಮಾಡಿದ ಖಾನನ ಪರಾಕ್ರಮವೇನಾಯಿತು, ಇಡೀ ಹಿಂದೂಸ್ಥಾನದಲ್ಲಿ ಪ್ರಭಾವಶಾಲಿಯೆಂದು ಪ್ರಸಿದ್ಧನಾದ ಟಿಪ್ಪೂಸುಲ್ತಾನನ ಅವಸ್ಥೆಏನಾಯಿತು ? ಈ ಜಗತ್ತಿನಲ್ಲಿ ನನಗೆ ಇರುವುದಕ್ಕೆ ಸ್ಥಳವೆಲ್ಲಿದೆ ? ಎಂದು ರೋಧಿಸಿದಳು. ಆ ದುಃಖದ ವೇಗ

ದಲ್ಲಿಯೇ ಆ ಮಹಾವೃಕ್ಷವನ್ನೇರಿ ನೇಣುಹಾಕಿಕೊಂಡು ವೃಕ್ಷದಿಂದ ಕೆಳಗೆ ಹಾರಿದಳು. ದೌಲತ್ತಳ ಪ್ರಾಣವು ಹಾರಿಹೋಯಿತು.

ಸುಲ್ತಾನೀರಾಜ್ಯವು ಅಸ್ತವಾಯಿತು

ಇಂಗ್ಲಿಷರ ಸೇನಾನಾಯಕನೂ, ಮಹಾರಾಷ್ಟ್ರ ದಳಪತಿಯಾದ ಹರಿಪಂತನೂ, ರಾಧಾರಾಣಿಯನ್ನು ಬಹಳವಾಗಿ ಹುಡುಕಿಸಿದರು. ರಾಧಾರಾಣಿಯನ್ನು ಆಮೇಲೆ ಯಾರೂ ನೋಡಲಿಲ್ಲ!

ಬಹುಕಾಲವಮೇಲೆ ತೇಜಸ್ವಿನಿಯಾದ ಸನ್ಯಾಸಿನಿಯೊಬ್ಬಳು ಗೈರಿಕವಸ್ತ್ರವನ್ನುಟ್ಟು ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಕಾವೇರಿಯ ವನಪ್ರದೇಶದಲ್ಲಿ ವೀರಾಗಿಯಾಗಿ ಅಲೆಯುತ್ತಿದ್ದಳು. ಆಗಾಗ ಆ ಸನ್ಯಾಸಿನಿಯು ದೌಲತ್ತಳು ನೇಣುಹಾಕಿಕೊಂಡ ಮಹಾವೃಕ್ಷದ ಕೆಳಗೆ ಕುಳಿತು ಸೀರವವಾಗಿ ಅಳುತ್ತಿದ್ದಳು.

ಪೂರ್ವಕಥೆಯನ್ನರಿತ ಹಳಬರು

"ಈ ಸನ್ಯಾಸಿಸಿಯೇ ರಾಧಾರಾಣಿ ಎಂದುಕೊಳ್ಳುತ್ತಿದ್ದರು."

ಶ್ರೀ ಚಾಮುಂಡೇಶ್ವರೀ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.